## 108. ಅಲ್ ಕೌಸರ್

ಸೂ. 3 ರು. 1

سُورَةُ الْكَوْثَرِ مَكِّيَّةٌ — آياتها ٣ — ركوعها ١

**(ಅವತೀರ್ಣ - ಮಕ್ಕಾದಲ್ಲಿ)**

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

بِسْمِ اللّٰهِ الرَّحْمٰنِ الرَّحِيْمِ

1. (ಸಂದೇಶವಾಹಕರೇ) ನಾವು ನಿಮಗೆ ಕೌಸರ್ ದಯಪಾಲಿಸಿರುತ್ತೇವೆ.[1]

اِنَّآ اَعْطَيْنٰكَ الْكَوْثَرَ ۝١

2. ನೀವಿನ್ನು ನಿಮ್ಮ ಪ್ರಭುವಿಗಾಗಿಯೇ ನಮಾಝ್ ನಿರ್ವಹಿಸಿರಿ ಮತ್ತು ಬಲಿದಾನ ನೀಡಿರಿ.

فَصَلِّ لِرَبِّكَ وَانْحَرْ ۝٢

3. ಖಂಡಿತವಾಗಿಯೂ ನಿಮ್ಮ ಶತ್ರುವೇ ಮೂಲ ಕಡಿಯಲ್ಪಟ್ಟವನಾಗಿರುವನು.[2]

اِنَّ شَانِئَكَ هُوَ الْاَبْتَرُ ۝٣

---

1. ಕೌಸರ್ ಎಂದರೆ ಇಹ-ಪರಗಳ ಅಸಂಖ್ಯ ಒಳಿತುಗಳಾಗಿವೆ. ಅದರಲ್ಲಿ ಹಶ್ರ್‌ನ ಮೈದಾನದ ಕೌಸರ್ ಸರೋವರ ಮತ್ತು ಸ್ವರ್ಗದ ಕೌಸರ್ ಕಾಲುವೆಯೂ ಸೇರಿದೆ.
2. ಸತ್ಯನಿಷೇಧಿಗಳು ಪ್ರವಾದಿವರ್ಯರನ್ನು(ಸ) ಅಬ್‌ತರ್ ಎನ್ನುತ್ತಿದ್ದರು. ಅವರು ಇದನ್ನು ಯಾವ ಅರ್ಥದಲ್ಲಿ ಬಳಸುತ್ತಿದ್ದರೆಂದರೆ ಪ್ರವಾದಿವರ್ಯರು(ಸ) ತಮ್ಮ ಜನಾಂಗದಿಂದ ಸಂಬಂಧ ಕಡಿದುಕೊಂಡಿದ್ದರು. ಅವರ ಗಂಡು ಸಂತತಿಯ ಪೈಕಿ ಯಾರೂ ಬದುಕುಳಿದಿರಲಿಲ್ಲ. ಆದ್ದರಿಂದ ಅವರು ಹೇಳ ಹೆಸರಿಲ್ಲದಂತಾಗಿ ಬಿಡುವರು ಎಂದು ಸತ್ಯನಿಷೇಧಿಗಳು ಭಾವಿಸಿದ್ದರು. ಅದಕ್ಕಾಗಿ ನಾಮಾವಶೇಷರಾಗುವವರು ತಾವಲ್ಲ ತಮ್ಮ ಶತ್ರುಗಳು ಎಂದು ಹೇಳಲಾಗಿದೆ.